ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಲ್ಯಾಪ್‌ಟಾಪ್ ಖರೀದಿಯಲ್ಲಿನ ಅವ್ಯವಹಾರದ ಕುರಿತು

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) :-

1474 (1670) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಹಾಗೂ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಪದವಿ ವಿದ್ಯಾರ್ಥಿಗಳಿಗೆ ಸರ್ಕಾರದ ವತಿಯಿಂದ ಉಚಿತವಾಗಿ ಲ್ಯಾಪ್‌ಟಾಪ್‌ಗಳನ್ನು ವಿತರಿಸಿರುವುದು ನಿಜವೇ; ಇದ್ದಲ್ಲಿ, ಯಾವ್ಯಾವ ವರ್ಷದ ಎಷ್ಟು ವಿದ್ಯಾರ್ಥಿಗಳಿಗೆ ನೀಡಲಾಗಿದೆ ; ವಿತರಿಸುವಾಗ ನಿಗದಿಪಡಿಸಿರುವ ಮಾನದಂಡ ಗಳೇನು; ಯಾವ್ಯಾವ ಕಾಲೇಜುಗಳಲ್ಲಿ ಎಷ್ಟೆಷ್ಟು ವಿದ್ಯಾರ್ಥಿಗಳಿಗೆ ವಿತರಿಸಲಾಗಿದೆ; (ಕಾಲೇಜು ಮತ್ತು ವಿಭಾಗವಾರು ಮಾಹಿತಿ ನೀಡುವುದು)

(ಆ) ಪ್ರತಿ ಲ್ಯಾಪ್‌ಟಾಪ್‌ಗೆ ನಿಗದಿಪಡಿಸಿರುವ ಬೆಲೆ ಎಷ್ಟು; ಖರೀದಿಸುವಲ್ಲಿ ಕಾನೂನಿನನ್ವಯ ಪಾರದರ್ಶಕವಾದ ಟೆಂಡರ್ ಕರೆಯಲಾಗಿದೆಯೇ; ಟೆಂಡರ್‌ನಲ್ಲಿ ಲ್ಯಾಪ್‌ಟಾಪ್‌ಗೆ ನಿಗದಿಪಡಿಸಿದ್ದ ಸಂರಚನೆ (configuration) ಏನು; (ಪ್ರತಿ ಒದಗಿಸುವುದು)

(ಇ) ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದ ಒಟ್ಟು ಸಂಸ್ಥೆಗಳೆಷ್ಟು; ಪ್ರತಿ ಸಂಸ್ಥೆಗಳು ಕೋಟ್ ಮಾಡಿದ್ದ ಬೆಲೆ ವಿವರ ತಿಳಿಸುವುದು;

(ಈ) ವಿದ್ಯಾರ್ಥಿಗಳಿಗೆ ಕನಿಷ್ಟ ಸಂರಚನೆ (configuration)ಹೊಂದಿರುವ ಲ್ಯಾಪ್‌ಟಾಪ್‌ಗಳನ್ನು ವಿತರಿಸಿರುವುದರಿಂದ ಕನಿಷ್ಟ ಟ್ಯಾಲಿ ಮತ್ತು ಪ್ರಾಜೆಕ್ಟ್ ಕೆಲಸಗಳಿಗೆ ಬಳಸಲಾಗದ ಪರಿಸ್ಥಿತಿ ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದ್ದಲ್ಲಿ, ಇದನ್ನು ಸರಿಪಡಿಸಲು ಕೈಗೊಳ್ಳುವ ಕ್ರಮಗಳೇನು;

(ಉ) ಪ್ರಸ್ತುತ ಖರೀದಿಸಿರುವ ಲ್ಯಾಪ್‌ಟಾಪ್‌ಗಳು ಆನ್‌ಲೈನ್ ಮಾರುಕಟ್ಟೆಯಲ್ಲಿ ಕೇವಲ ರೂ.20 ಸಾವಿರಗಳಿಗೆ ದೊರೆಯುತ್ತಿರುವುದು ನಿಜವೆ; ಇದ್ದಲ್ಲಿ ಸರ್ಕಾರದ ವತಿಯಿಂದ ಇದಕ್ಕಿಂತ ಹೆಚ್ಚಿನ ಮೊತ್ತವನ್ನು ನೀಡಿ ಖರೀದಿಸಲಾಗಿದೆಯೇ; ಇದ್ದಲ್ಲಿ ಕಾರಣಗಳೇನು;

(ಊ) ಲ್ಯಾಪ್‌ಟಾಪ್‌ಗಳಿಗೆ ಹೆಚ್ಚಿನ ಮೊತ್ತದ ದರ ನೀಡಿ ಖರೀದಿಸಿರುವ ಬಗ್ಗೆ ಪತ್ರಿಕೆಗಳಲ್ಲಿ ವರದಿಯಾಗಿರುವುದು ನಿಜವೆ; ಇದ್ದಲ್ಲಿ ಈ ಅವ್ಯವಹಾರದ ಬಗ್ಗೆ ಸರ್ಕಾರವು ತನಿಖೆ ನಡೆಸಿ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು)